# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 2102 |
| 02. | ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು | : ಶ್ರೀ ಮಂಜುನಾಥ್ ಭಂಡಾರಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 03. | ಉತ್ತರಿಸುವ ದಿನಾಂಕ | : 17/03/2022 |
| 04. | ಉತ್ತರಿಸುವ ಸಚಿವರು. | : ಗೃಹ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಲ್ಲಿ ಅಂತರ್ಜಾಲ ಮುಖಾಂತರ ದಾಖಲಾಗಿರುವ ಪ್ರಕರಣಗಳೆಷ್ಟು ; ಅವುಗಳಲ್ಲಿ ಪತ್ತೆ ಹಚ್ಚಿರುವ ಪ್ರಕರಣಗಳೆಷ್ಟು ; | ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಅಂತರ್ಜಾಲ ಮುಖಾಂತರ ದಾಖಲಾಗಿರುವ ಪ್ರಕರಣಗಳು (ಸೈಬರ್ ಅಪರಾಧಗಳು) ಈ ಕೆಳಕಂಡಂತಿವೆ. (ಕೆಳಗಿನ ಕೋಷ್ಟಕ ನೋಡಿ) |

| ವರ್ಷ | ಅಂತರ್ಜಾಲ ಪ್ರಕರಣಗಳ (ಸೈಬರ್ಅಪರಾಧಗಳು) ಸಂಖ್ಯೆ | ಪತ್ತೆ ಹಚ್ಚಿರುವ ಪ್ರಕರಣಗಳ ಸಂಖ್ಯೆ |
|---|---|---|
| 2019 | 11987 | 195 |
| 2020 | 10716 | 2233 |
| 2021 | 8146 | 1440 |
| 2022 (ಫೆಬ್ರವರಿ 28ರ ವರೆಗೆ) | 1730 | 68 |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಆ) | ದೂರವಾಣಿ ಕರೆ ಮತ್ತು ಸಂದೇಶಗಳ ಮೂಲಕ ಸಾರ್ವಜನಿಕರ ಹಣವನ್ನು ಅಂತರ್ ರಾಜ್ಯ ಮತ್ತು ವಿದೇಶಿ ಕಳ್ಳರು ಲಪಟಾಯಿಸುವ ಬಗ್ಗೆ ದಾಖಲಾದ ಪ್ರಕರಣಗಳೆಷ್ಟು ; | ಸೈಬರ್ ಅಪರಾಧಗಳ ಪೈಕಿ, ದೂರವಾಣಿ ಕರೆ ಮತ್ತು ಸಂದೇಶಗಳ ಮೂಲಕ ಸಾರ್ವಜನಿಕರ ಹಣವನ್ನು ಅಂತರ್ ರಾಜ್ಯ ಮತ್ತು ವಿದೇಶಿ ಕಳ್ಳರು ಲಪಟಾಯಿಸಿರುವ ಕುರಿತಾಗಿ ಕಳೆದ 3 ವರ್ಷಗಳಲ್ಲಿ ವರದಿಯಾಗಿರುವ ಪ್ರಕರಣಗಳ ಸಂಖ್ಯೆ ಈ ಕೆಳಕಂಡಂತಿವೆ. (ಕೆಳಗಿನ ಕೋಷ್ಟಕ ನೋಡಿ) |

| ವರ್ಷ | ವರದಿಯಾದ ಪ್ರಕರಣಗಳ ಸಂಖ್ಯೆ |
|---|---|
| 2019 | 7258 |
| 2020 | 6919 |
| 2021 | 6182 |
| 2022 (ಫೆಬ್ರವರಿ 28ರ ವರೆಗೆ) | 1110 |

ಇ) ಸಿ.ಸಿ.ಟಿ.ವಿ. ಮೊಬೈಲ್ ಟವರ್ ಲೊಕೇಷನ್ ಮುಂತಾದ ಆಧುನಿಕ ತಂತ್ರಜ್ಞಾನಗಳ ಮೂಲಕ ಕಳೆದ 3 ವರ್ಷಗಳಲ್ಲಿ ಪತ್ತೆ ಹಚ್ಚಿದ ಪ್ರಕರಣಗಳೆಷ್ಟು ;

ವರದಿಯಾದ ಪ್ರಕರಣಗಳ ಪೈಕಿ ಸಿ.ಸಿ.ಟಿ.ವಿ. ಮೊಬೈಲ್ ಟವರ್ ಲೊಕೇಷನ್ ಮೂಲಕ ಕಳೆದ 3 ವರ್ಷಗಳಲ್ಲಿ ಪತ್ತೆ ಹಚ್ಚಿದ ಪ್ರಕರಣಗಳು ಈ ಕೆಳಕಂಡಂತಿವೆ.

| **ವರ್ಷ** | **ಪತ್ತೆ ಹಚ್ಚಿರುವ ಪ್ರಕರಣಗಳ ಸಂಖ್ಯೆ** |
|---|---|
| 2019 | 166 |
| 2020 | 2216 |
| 2021 | 1417 |
| 2022 (ಫೆಬ್ರವರಿ 28ರ ವರೆಗೆ) | 68 |

ಈ) ಪೊಲೀಸ್ ಇಲಾಖೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಬಳಸುವ ಮೂಲಕ ಸೈಬರ್ ಪ್ರಕರಣಗಳನ್ನು ಪತ್ತೆ ಹಚ್ಚಲು ಸರ್ಕಾರ ಕೈಗೊಂಡಿರುವ ಕ್ರಮಗಳು ಯಾವುವು ?

**ಪೊಲೀಸ್ ಇಲಾಖೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಬಳಸುವ ಮೂಲಕ ಸೈಬರ್ ಪ್ರಕರಣಗಳನ್ನು ಪತ್ತೆ ಹಚ್ಚಲು ಸರ್ಕಾರವು ಕೈಗೊಂಡಿರುವ ಕ್ರಮಗಳು ಈ ಕೆಳಕಂಡಂತಿವೆ :**

- ರಾಜ್ಯದ ಪ್ರತಿ ಜಿಲ್ಲೆ/ನಗರಗಳಲ್ಲಿ ಸೈಬರ್ ಅಪರಾಧಗಳನ್ನು ದಾಖಲಿಸಿಕೊಂಡು, ತನಿಖೆಯನ್ನು ನಿರ್ವಹಿಸಲು ಸೈಬರ್ ಎಕೊನಾಮಿಕ್ ಮತ್ತು ನಾರ್ಕೋಟಿಕ್ ಪೊಲೀಸ್ ಠಾಣೆಗಳನ್ನು (CEN Police Station) ಸ್ಥಾಪಿಸಲಾಗಿದೆ.
- ಸಿ.ಐ.ಡಿ. ಕಛೇರಿಯಲ್ಲಿ ಸಿ.ಎಫ್.ಯು (Cyber Forensic Unit) ವಿಭಾಗವು ಹಿರಿಯ ಅಧಿಕಾರಿಗಳ ಉಸ್ತುವಾರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸಿ.ಎಫ್.ಯು ವಿಭಾಗದಲ್ಲಿ ಆಧುನಿಕ ತಂತ್ರಜ್ಞಾನ ಬಳಸಿಕೊಂಡು ಪ್ರಕರಣಗಳನ್ನು ಭೇದಿಸಲಾಗುತ್ತಿದೆ.
- UFED4PC ರಿಂದ ಮೊಬೈಲ್‌ನಲ್ಲಿರುವ ಮಾಹಿತಿಯನ್ನು ಸಂಗ್ರಹಿಸಿ ತನಿಖೆಗೆ ಅಳವಡಿಸಿಕೊಳ್ಳಲಾಗುವುದು.
- AXIOM-D Software ನಿಂದ ಕಂಪ್ಯೂಟರ್ ಸಿಸ್ಟಮ್‌ನಲ್ಲಿ ಇರುವ ಮಾಹಿತಿಯನ್ನು ಸಂಗ್ರಹಿಸಿ ತನಿಖೆಗೆ ಅಳವಡಿಸಿಕೊಳ್ಳಲಾಗುವುದು.
- Facebook, Twitter, Instagram, Whatsapp, Google ಮುಂತಾದ ಸಾಮಾಜಿಕ ಜಾಲತಾಣಗಳ ಕಂಪನಿಯ ನೋಡಲ್ ಅಧಿಕಾರಿಗಳನ್ನು ಸಂಪರ್ಕಿಸಿ ಆರೋಪಿತನ ಆರೋಪಣೆಯ ಬಗ್ಗೆ ಅಗತ್ಯ ದಾಖಲಾತಿಗಳನ್ನು ಪಡೆದುಕೊಂಡು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸುವಂತಹ ಕ್ರಮಗಳನ್ನು ಕೈಗೊಳ್ಳಲಾಗುವುದು.
- Handcom MD next softwareನ್ನು ಬಳಸಿ ಮೊಬೈಲ್‌ನಲ್ಲಿ ಇರುವ Chip & J tag method ನಿಂದ ಮಾಹಿತಿಯನ್ನು ಪಡೆದು ತನಿಖೆಗೆ ಅಳವಡಿಸಿಕೊಳ್ಳಲಾಗುವುದು.
- PC-3000 Software ನಿಂದ ಹಾಳಾಗಿರುವ ಹಾರ್ಡ್‌ಡಿಸ್ಕ್‌ನಿಂದ ಮಾಹಿತಿಯನ್ನು ಪಡೆದುಕೊಂಡು ತನಿಖೆಗೆ ಅಳವಡಿಸಿಕೊಳ್ಳಲಾಗುವುದು.
- ಸೈಬರ್ ಕ್ರೈಂ ಅಪರಾಧ ಪ್ರಕರಣಗಳನ್ನು ತಡೆಗಟ್ಟುವ ಸಲುವಾಗಿ ಸಿ.ಐ.ಡಿ. ವಿಭಾಗದಲ್ಲಿ "Centre for Cyber crime Investigation & Digital Forensic Training & Research"ರವರ ಸಹಯೋಗದೊಂದಿಗೆ ವಿಶೇಷ ಸೈಬರ್

| | | |
|---|---|---|
| | | ಪೊಲೀಸ್ ಠಾಣೆಯ ಅಧಿಕಾರಿಗಳು ಮತ್ತು ಸಿಬ್ಬಂಧಿಗಳಿಗೆ ವಿಶೇಷ ತರಭೇತಿಯನ್ನು ನೀಡಲಾಗುತ್ತಿದೆ.<br>➢ ಅಪರಾಧ ನಡೆದ ಸ್ಥಳದಲ್ಲಿ ನಿಗದಿತ ಸಮಯದ ಅವಧಿಯಲ್ಲಿ ಬಳಸಲಾದ ಮೊಬೈಲ್ ಸಂಖ್ಯೆಗಳ ಪತ್ತೆ ಹಚ್ಚಿ ಅತ್ಯಾಧುನಿಕ 3ಜಿ/4ಜಿ ಟವರ್ ಡಂಪ್ ಸಾಧನವನ್ನು ಬಳಸಲಾಗುತ್ತಿದೆ.<br>➢ ವಂಚಕರ ಹಾಗೂ ಸಂಶಯಾಸ್ಪದ ವ್ಯಕ್ತಿಗಳ ಮೊಬೈಲ್ ಕರೆಗಳನ್ನು ಪರಿಶೀಲಿಸಲು ಸಿ5 ಸಿಡಿಆರ್ ಅನಲೈಜರ್ ಸಾಫ್ಟ್‌ವೇರ್ ಬಳಸಲಾಗುತ್ತಿದೆ.<br>➢ ಸೈಬರ್ ಪ್ರಕರಣಗಳಲ್ಲಿ ಭಾಗಿಯಾದ ಮೊಬೈಲ್‌ಗಳಲ್ಲಿನ ಡಾಟಾವನ್ನು ಎಕ್ಸ್‌ಟ್ರ್ಯಾಕ್ಟ್ ಮಾಡಲು ಅತ್ಯಾಧುನಿಕ ಆ್ಯಂಟಿ ಅನಾಲೈಜರ್ ಮತ್ತು ಊಫೆಡ್, ಎಫ್.ಟಿ.ಕೆ, ಎಕ್ಸಿಪ್ರ್ಯೋಮ ಸಾಫ್ಟ್‌ವೇರ್‌ಗಳು ಬಳಸಲಾಗುತ್ತಿದೆ.<br>➢ ಆಪಾಧಿತರ ಬ್ಯಾಂಕ್ ಖಾತೆಗಳನ್ನು ಕೂಡಲೆ ಡೆಬಿಟ್ ಫ್ರೀಜ್ ಮಾಡಲು ತುರ್ತು ಕರೆ ನಂ:1930 ನ್ನು ಕೇಂದ್ರ ಸರ್ಕಾರ ನೀಡಿದ್ದು, ಈ ಸಂಖ್ಯೆಗೆ ವಂಚನೆಗೆ ಒಳಗಾದವರು ಕೂಡಲೇ ಕರೆ ಮಾಡಿದರೆ ಆಪಾಧಿತನ ಬ್ಯಾಂಕ್ ಅಕೌಂಟ್ ನಂಬರ್ ಅನ್ನು ಡೆಬಿಟ್ ಫ್ರೀಜ್ ಮಾಡಲಾಗುತ್ತದೆ.<br>➢ ಆಪಾಧಿತನ ಬಗ್ಗೆ ಮಾಹಿತಿ ತೆಗೆಯಲು ಬೆನಿಫಿಷರಿ ವಿವರಗಳನ್ನು ಪಡೆಯಲು ಇ ಕಾಮರ್ಸ್ ವೆಬ್ ಸೈಟ್‌ಗಳ ಮತ್ತು ವ್ಯಾಲೆಟ್‌ಗಳ, ಬ್ಯಾಂಕ್‌ಗಳ/ಸಾಮಾಜಿಕ ಜಾಲತಾಣಗಳ ಸರ್ವೀಸ್ ಪ್ರೊವೈಡರ್‌ಗಳಿಗೆ 91 & 102 ಸಿ.ಆರ್.ಪಿ.ಸಿ ರೀತ್ಯಾ ನೋಟೀಸ್‌ಗಳನ್ನು ಇ-/ಮೇಲ್ ಮೂಲಕ ನೀಡುವ ಮೂಲಕ ಆಪಾಧಿತರ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ.<br>➢ ವಂಚನೆ ಮಾಡಿದ ಆರೋಪಿಯ ಖಾತೆಗಳ ಬ್ಯಾಂಕ್ KYC ಯನ್ನು ತರಿಸಿಕೊಂಡು, ಯಾರ ಖಾತೆಗೆ ವಂಚಿಸಿರುವ ಹಣವು ಹೋಗಿರುತ್ತದೆ ಎಂಬ ಬಗ್ಗೆ ಮಾಹಿತಿ ಪಡೆಯಲಾಗುವುದು.<br>➢ ನ್ಯಾಷನಲ್ ಕ್ರೈಂ ಪೋರ್ಟಲ್‌ನಲ್ಲಿ ವಂಚನೆಗೆ ಒಳಗಾದವರು ನೀಡಿದ ಅರ್ಜಿಗಳನ್ನು ಸ್ವೀಕರಿಸಿ ತುರ್ತಾಗಿ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>➢ ಆರೋಪಿಗಳ ಮೊಬೈಲ್ ಫೋನ್‌ಗಳನ್ನು ಸೈಬರ್ ಲ್ಯಾಬ್‌ಗೆ ಕಳುಹಿಸಿ ಎಕ್ಸ್‌ಟ್ರ್ಯಾಕ್ಟ್ ಹಾಗೂ ಡಿವಿಆರ್‌ಗಳ ಮಾಹಿತಿಯನ್ನು ಪಡೆದು ಮಾನ್ಯ ನ್ಯಾಯಾಲಯಕ್ಕೆ ಸಾಕ್ಷಿಯಾಗಿ ನೀಡಲಾಗುತ್ತಿದೆ. |

**ಕಡತ ಸಂಖ್ಯೆ : ಹೆಚ್‌ಡಿ 28ಪಿಸಿಕ್ಯೂ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು